ನವಸಾಕ್ಷರ ಪುಸ್ತಕಮಾಲೆ - ೬

# ಭಕ್ತ ಸಿರಿಯಾಳ

ಡಾ|| ಎಚ್. ಡಿ. ಚಂದ್ರಪ್ಪಗೌಡ



ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜ ಪೇಟೆ ಬೆಂಗಳೂರು.೧೮

...ಸಾಕ್ಷರ ಪುಸ್ತಕಮಾಲೆ

ಹೊಸದಾಗಿ ಅಕ್ಷರ ಕಲಿತವರ ಓದಿನ ಆಸಕ್ತಿ ಬೆಳೆಸಲು ಮತ್ತು ಉಳಿಸಲು ಈ ಸಾಹಿತ್ಯ ಮಾಲೆಯನ್ನು ಆರಂಭಿಸಲಾಗಿದೆ. ರಾಜ್ಯದ ಲೋಕ ಶಿಕ್ಷಣ ನಿರ್ದೇಶನಾಲಯವು ಈ ಮಾಲೆಯ ಪುಸ್ತಕಗಳಿಗೆ ಬೇಡಿಕೆ ಸಲ್ಲಿಸಿರುವುದು ಪರಿಷತ್ತಿಗೆ ಉತ್ತೇಜನ ದೊರೆತಂತಾಗಿದೆ. ಈ ಉದ್ದೇಶಕ್ಕಾಗಿ ಕರೆದಿದ್ದ ಹಸ್ತಪ್ರತಿಗಳನ್ನು ಪರಿಶೀಲಿಸಿ, ಆಯ್ಕೆ ಮಾಡಿಕೊಟ್ಟ ಸಮಿತಿಗೆ ಪರಿಷತ್ತು ಋಣಿಯಾಗಿದೆ ಮುದ್ರಕರಾದ ಬೆಟ್ಟದಪುರ ಪ್ರಿಂಟರ್ಸ್ ಅವರಿಗೆ ವಂದನೆಗಳು.

ಜಿ. ಎಸ್. ಸಿದ್ಧಲಿಂಗಯ್ಯ
ಅಧ್ಯಕ್ಷ

BHATTI JARUVUDU
by Dr. H. D. Chandrappa Gowda
Published by Kannada Sahitya Parishat
Chamarajpet, Bangalore–560 018.

ಪ್ರಥಮ ಮುದ್ರಣ : 1991
ಪ್ರತಿಗಳು : 2000



ಬೆಲೆ : ರೂ. 6-00

ಆಯ್ಕೆ ಸಮಿತಿ :

ಎನ್. ನಂಜುಂಡಸ್ವಾಮಿ — ಹಿ. ಮ. ನಾಗಯ್ಯ
ಎಚ್. ಎಸ್. ಪಾರ್ವತಿ — ಜಿ. ಚನ್ನವೀರಸ್ವಾಮಿ
ಸಿ. ಕೆ. ಪರಶುರಾಮಯ್ಯ — ಎಂ. ಪಿ. ಪರಮಶೇಖರಯ್ಯ

ನೆರವು : ಆರ್. ಎಸ್. ರಾಮರಾವ್



ಮುದ್ರಣ : ಬೆಟ್ಟದಪುರ ಪ್ರಿಂಟರ್ಸ್, ತ್ಯಾಗರಾಜನಗರ, ಬೆಂಗಳೂರು-28

# ಭಟ್ಟೆ - ಜಾರುವುದು

ಯಾವುದೇ ಕಾರಣಗಳಿಂದ ಹೊಟ್ಟೆಯೊಳಗಡೆ ಚಳುಕು ಅಥವಾ ನೋವು ಕಾಣಿಸಿಕೊಂಡರೆ "ಭಟ್ಟೆ-ಜಾರಿದೆ" ಎಂಬ ಅನುಮಾನ ನಮ್ಮಲ್ಲಿ ಬಹಳ ಜನರಲ್ಲಿ ಉಂಟಾಗುತ್ತದೆ. ಕೆಲವು ಸಾರಿ ವಾಂತಿ-ಭೇದಿಗಳಾದಾಗಲೂ ಈ ಕಾರಣವನ್ನೂ ಮುಂದೆ ಒಡ್ಡುವುದುಂಟು, ಹೊಟ್ಟೆಯೊಳಗಡೆ ಇರುವ ಜಠರ, ಕರಳು, ಯಕೃತ್ತು, ತೊರಳೆ(ಪ್ಲೀಹ), ಮುಂತಾದ ಅವಯುವಗಳ ನೆಲೆ ಮತ್ತು ಕಾರ್ಯ ವಿಧಾನಗಳ ಬಗೆಗೆ ಸರಿಯಾದ ತಿಳಿವಳಿಕೆ ಇಲ್ಲದಿರುವುದೇ ಇಂತಹ ನಂಬಿಕೆಗಳಿಗೆ ಕಾರಣವೆನ್ನಬಹುದು. ಮೂಢನಂಬಿಕೆ, ಅಂಧ-ಶ್ರದ್ಧೆಗಳೇ ಈ ತೆರನ ತಪ್ಪು ತಿಳಿವಳಿಕೆಗಳಿಗೆ ಮೂಲ ಆಧಾರ. ಓದು ಬರಹ ತಿಳಿಯದ ಹಳ್ಳಿಗಾಡಿನವರಿಂದ ಹಿಡಿದು ನಗರವಾಸಿಗಳಾದ ಬುದ್ಧಿ ಜೀವಿಗಳಲ್ಲೂ ಸಹ ಇಂತಹ ನಂಬಿಕೆ ಇರುವುದು ಅಪರೂಪವೇನಲ್ಲ.

"ಭಟ್ಟೆ-ಜಾರುವುದು" ಎಂದರೆ ಏನಾಗುತ್ತದೆ ಎಂಬುದರ ಬಗೆಗೆ ಎಲ್ಲರಲ್ಲೂ ಸರ್ವಸಮ್ಮತವಾದ ಅಭಿ

ಪ್ರಾಯ ಇದ್ದಂತಿಲ್ಲ. ಆದರೂ ಹೊಟ್ಟೆಯೊಳಗಡೆ ಇರುವ ಕರುಳು, ತೊರಳೆಯಂತಹ ಅವಯವಗಳು ತಮ್ಮ ನಿಗದಿತ ಜಾಗಗಳಿಂದ ಜಾರಿಕೊಳ್ಳುತ್ತವೆಂಬುದು ಬಹು ಜನರ ಅನಿಸಿಕೆ ಎನ್ನಬಹುದು. ಹೊಟ್ಟೆಯ ಮುಂಭಾಗಕ್ಕೆ ಎಣ್ಣೆ ಹಚ್ಚಿ, ತೀಡುವ ಕೈಚಳಕದಿಂದ ಹಾಗೆ ಜಾರಿದ ಅವಯವಗಳನ್ನು ಅವುಗಳ ಮೊದಲಿನ ಸ್ಥಾನಕ್ಕೆ ಹಿಂದಿರುಗಿಸಬಹುದೆಂಬ ನಂಬುಗೆಯೇ ಭಟ್ಟೆ-ಕಟ್ಟುವ ಕಾರ್ಯಾಚರಣೆಯ ಉದ್ದೇಶವೆಂದು ಹೇಳುತ್ತಾರೆ. ಆದರೆ ಈ ರೀತಿಯ ಕೈಚಳಕದಿಂದ ಅಪಾರ ಹಾನಿಯಾಗುವುದೆಂಬುದರ ಅರಿವು ಅವರಾರಿಗೂ ಇರುವಂತಿಲ್ಲ. ಕರುಳು, ಮತ್ತು ಅದರ ಹೊರಗಿನ ಪೊರೆ ಊದಿಕೊಂಡು ಆಹಾರ ವಸ್ತುಗಳ ಮುಂದುವರಿದ ಚಲನೆಗೆ ಅಡ್ಡಿಯಾಗಬಹುದು; ಕರುಳಿನ ಸುರುಳಿಗಳು ಒಡೆದು, ಅವುಗಳ ಒಳಗಡೆಯ ತೀಕ್ಷ್ಣವಾದ ಜೀರ್ಣ ರಸಗಳು ಹೊರಗೆ ಚೆಲ್ಲಿ ಮರಣಾಂತಿಕ ಅಪಾಯ ಉಂಟಾದ ಪ್ರಕರಣಗಳೂ ಇರುತ್ತವೆ ಎಂದರೆ 'ಭಟ್ಟೆಕಟ್ಟು' ಕಟ್ಟುವಂತಹ ಕುರುಡು ಪದ್ಧತಿಗಳಿಂದಾಗಬಹುದಾದ ಅಪಾಯಗಳ ಅರಿವಾಗಬಹುದಲ್ಲವೆ ?

## ಮೂರು ಪ್ರಕರಣಗಳು

ಭಟ್ಟೆ ಕಟ್ಟುವುದರಿಂದ ಉಂಟಾಗುವ ಅಪಾಯಗಳ ಬಗೆಗೆ ಈಗ ವಿವರಿಸುವ ಮೂರು ಪ್ರಕರಣಗಳು

ಮಾದರಿಯ ಉದಾಹರಣೆಗಳಾಗಿವೆ. ಅವು ನಿಜ ಜೀವನ ದಲ್ಲಿ ನಡೆದ ಸತ್ಯ ಘಟನೆಗಳು. ರೋಗಿಗಳ ಹೆಸರು ಮತ್ತು ಊರಗಳನ್ನು ಮಾತ್ರ ಬದಲಾಯಿಸಲಾಗಿದೆ, ಅಷ್ಟೆ.

ತೀರ್ಥಹಳ್ಳಿಯ ಹತ್ತಿರದ ಹೊಳೆಗದ್ದೆ ಎಂಬ ಮಲೆನಾಡಿನ ಪುಟ್ಟಹಳ್ಳಿಯ ದ್ಯಾವಪ್ಪ ಗೌಡರ ಮಗ, ತಿಮ್ಮಪ್ಪ; ೨೦ ವರ್ಷದ ಆರೋಗ್ಯವಂತ ಯುವಕ. ಒಂದು ದಿನ ಕೂಲಿ ಕೆಲಸದವರ ಜೊತೆ ಸೇರಿಕೊಂಡು ದನಗಳ ಕೊಟ್ಟಿಗೆಯಿಂದ ತನ್ನ ಗದ್ದೆಗಳಿಗೆ ಗೊಬ್ಬರವನ್ನು ಹೊತ್ತು ಸಾಗಿಸುತ್ತಿದ್ದ. ಮಧ್ಯಾಹ್ನದ ಹೊತ್ತಿಗೆ ಹೊಟ್ಟೆ ಯೊಳಗಡೆ ಬಿಟ್ಟು ಬಿಟ್ಟು ಬರುವ ಚಳುಕಿನಂತಹ ಬೇನೆ ಶುರುವಾಯಿತು. ಕೆಲಸ ಮುಗಿಸಿ ಸಾಯಂಕಾಲ ಮನೆಗೆ ಹಿಂದಿರುಗಿದಾಗ ಬಾಧೆ ಇನ್ನೂ ಹೆಚ್ಚಾಯಿತು. ಬಂದ ವನೇ ಹಾಸಿಗೆ ಹಿಡಿದು ಮಲಗಿದ. ಹೊಟ್ಟೆಯ ಮೇಲೆ ಕೈ ಇರಿಸಿಕೊಂಡು ನರಳಿ ಒದ್ದಾಡುತ್ತಿದ್ದ. ತಾಯಿ ಹಾಲಮ್ಮ ಅವನನ್ನು ಉಪಚರಿಸಿದಳು. ಉಷ್ಣದಿಂದ ಹಾಗಾಗಿರಬೇಕೆಂದು ಜೀರಿಗೆ ಕಷಾಯ ಮಾಡಿ ಕುಡಿಸಿ ದಳು. ಅರ್ಧ ತಾಸಿನಲ್ಲಿ ಅದೆಲ್ಲಾ ವಾಂತಿಯಾಯಿತು. ಮೊದಲು ಹೊಟ್ಟೆಯ ಎಲ್ಲಾ ಕಡೆ ಸುತ್ತಾಡುತ್ತಿದ್ದ ನೋವು, ಕ್ರಮೇಣ ಬಲಭಾಗದ ಕಿಬ್ಬೊಟ್ಟೆಯಲ್ಲಿ ನೆಲೆ

ಯಾಗಿ ನಿಂತಿತು. ಆದರೆ ತಿಮ್ಮಪ್ಪನ ರೋದನ ಒದ್ದಾಟ ಗಳು ಕಡಿಮೆಯಾಗಲಿಲ್ಲ. ದಿನವೆಲ್ಲಾ ಕೆಲಸ ಮಾಡಿ ಕೊಂಡಿದ್ದ ಮಗ ಇದ್ದಕ್ಕಿದ್ದ ಹಾಗೆ ನೋವಿನಿಂದ ಒದ್ದಾ ಡುವುದನ್ನು ನೋಡಿದ ತಂದೆಗೂ ಗಾಬರಿಯಾಯಿತು. ಮನೆ-ದೈವಗಳ ಕಾಟದಿಂದಲೇ ಮಗನಿಗೆ ತೊಂದರೆ ಉಂಟಾಗಿರಬಹುದೆಂದು ಅನುಮಾನ ಪಟ್ಟರು. ಆದಷ್ಟು ಬೇಗ ವರ್ಷದ ದೈವದ ಹರಕೆ ಮಾಡುವ ಸಂಕಲ್ಪವನ್ನು ಮನಸ್ಸಿನಲ್ಲಿಯೇ ಮಾಡಿಕೊಂಡರು. ಮಗನಿಗೆ ತೆಂಗಿನ ಕಾಯಿಯೊಂದನ್ನು ಸುತ್ತು ಬರಿಸಿ, ನಾಲ್ಕಾಣೆ ತಪ್ಪು ಕಾಣಿಕೆಯನ್ನೂ ಸೇರಿಸಿ ಅವನು ಮಲಗಿದ ಹತ್ತಿರದ ನಾಗಂದಿಗೆಯ ಮೇಲೆ ಇರಿಸಿದರು. ತುಳಸಿಕಟ್ಟೆ ಎದಿರು ದೀಪ ಹಚ್ಚಿ ಪ್ರಾರ್ಥಿಸಿದರು, ಆದರೂ ಮಗನ ಹೊಟ್ಟೆ ನೋವು ಕಡಿಮೆಯಾಗುವಂತೆ ಕಾಣಲಿಲ್ಲ; ಜೊತೆಗೆ ಸ್ವಲ್ಪ ಜ್ವರ ಬಂದಿದ್ದಲ್ಲದೆ, ವಾಂತಿಯೂ ಪದೇ ಪದೇ ಆಗತೊಡಗಿತು.

ಅಷ್ಟರಲ್ಲೇ ಅವನ ಸೋದರಮಾವ ಕುಂದೂಡಿ ಸಿದ್ದಪ್ಪಗೌಡರು, ಅವರ ಮನೆಗೆ ಬಂದರು. ತಿಮ್ಮಪ್ಪನಿಗೆ ಕಾಯಿಲೆ ಶುರುವಾದ ವಿವರಗಳನ್ನೆಲ್ಲಾ ತಿಳಿದರು. ಅವ ನಿಗೆ ಭಟ್ಟೆ ಜಾರಿರುವುದರಿಂದಲೇ ಹೊಟ್ಟೆ ನೋವು ಆಗಿರ ಬಹುದೆಂಬುದು ಅವರ ತೀರ್ಮಾನವಾಯಿತು. ಆ ದಿನ

ಭಾರವಾದ ಗೊಬ್ಬರದ ತಟ್ಟೆಗಳನ್ನು ಕೆಳಗಿಂದ ಎತ್ತಿ ತಲೆಯ ಮೇಲೆ ಇರಿಸಿಕೊಳ್ಳುವಾಗ ಕರುಳು ಜಾರಿರುವುದರಿಂದಲೇ ಹಾಗಾಗಿದೆ ಎಂಬುದು ಅವರ ಖಚಿತ ಅಭಿಪ್ರಾಯ.

ಭಟ್ಟಿ-ಕಟ್ಟುವುದರಲ್ಲಿ ಅನುಭವಸ್ಥನಾದ ಸೇರೇಗಾರ ಅಣ್ಣಪ್ಪನನ್ನು ಕೂಡಲೇ ಅಲ್ಲಿಗೆ ಕರೆಸಿದರು. ರೋಗಿಯನ್ನು ಪರೀಕ್ಷಿಸಿದ ಅಣ್ಣಪ್ಪನೂ ಭಟ್ಟಿ ಜಾರಿರುವುದನ್ನು ಖಾತರಿ ಪಡಿಸಿದನು. ಭಟ್ಟಿ ಕಟ್ಟಲು ಬೇಕಾಗುವ ಪರಿಕರಗಳನ್ನೆಲ್ಲಾ ತರಿಸಿಕೊಂಡನು. ತಿಮ್ಮಪ್ಪನ ಹೊಟ್ಟೆಯ ಮುಂಭಾಗಕ್ಕೆ ಎಣ್ಣೆ ಹಚ್ಚಿ ಮೊದಲು ಮೆದುವಾಗಿ ಹೊರವ್ಮೆ ಕಡೆಯಿಂದ ತೀಡುವುದಕ್ಕೆ ಶುರು ಮಾಡಿದನು. ನಂತರ ತೀಡುವ ಕೈ ಚಳಕ ಬಿರುಸಿನಿಂದ ಜರುಗಿತು. ಹೊಟ್ಟೆಯ ನಾಲ್ಕೂ ಕಡೆಗಳಿಂದ ಕರುಳಿನ ಸುರುಳಿಗಳು ಹೊಕ್ಕಳದ ಕಡೆ "ಜರುಗುವಂತೆ" ಮಾಡಿದ ಅನುಭವ ಅವನಿಗೆ ಉಂಟಾದ ತತ್‌ಕ್ಷಣ ಅವುಗಳನ್ನು ಒಂದು ಕಡೆ ಹಿಡಿದು ನಿಲ್ಲಿಸುವಂತೆ ಮಾಡಿದನು. ಮೊದಲೇ ಏರ್ಪಾಡು ಮಾಡಿಕೊಂಡಿದ್ದ ಕೆಂಪು ನಾಮದ ಓಕಳಿಯ ಕಂಚಿನ ಬಟ್ಟಲು ಮತ್ತು ಅದರ ನಡುವಿನಲ್ಲಿ ಸೆಗಣಿ ಮುದ್ದೆಯ ಮೇಲೆ ಇರಿಸಿದ್ದ ಉರಿಯುವ ಹಣತೆಯನ್ನು ಮೂರು ಸಾರಿ ತಿಮ್ಮಪ್ಪನಿಗೆ ಸುತ್ತು ಬರಿಸಿದನು. ನಂತರ ಉರಿ

ಯುತ್ತಿದ್ದ ಹಣತೆಯನ್ನು ಸೆಗಣಿ ಉಂಡೆಯ ಸಮೇತ ತಾನು ಒತ್ತಿ ಹಿಡಿದು ಕೊಂಡಿದ್ದ ಹೊಟ್ಟೆಯ ಭಾಗದಲ್ಲಿ ನೆಲೆಮಾಡಿ ನಿಲ್ಲಿಸಿದನು. ಪಕ್ಕದಲ್ಲಿದ್ದ ಕಂಚಿನ ಚೊಂಬನ್ನು ಅದರ ಬಾಯಿ ಕೆಳಗೆ ಮಾಡಿ ಹಣತೆಯೂ ಅದರೊಳಗೆ ಸೇರಿಕೊಳ್ಳುವಂತೆ ಹೊಟ್ಟೆಗೆ ಮೊಗುಚಿ ಒತ್ತಿ ಹಿಡಿದನು. ಅದು ಅಲ್ಲೇ ಗಪ್ಪಾಗಿ ಹಿಡಿದು ಕೊಂಡಿತು. ಭಟ್ಟೆ ಜಾರಿದ್ದು ಖಾತರಿಯಾಯಿತು !



ಚಿತ್ರ ೧. ಭಟ್ಟೆ ಕಟ್ಟುವುದು

ತಿಮ್ಮಪ್ಪ, ಇನ್ನೊಂದು ತಾಸು ಅಲ್ಲಾಡದೆ ಸುಮ್ಮನೆ ಮಲಗಿದ್ದ. ಅಷ್ಟರಲ್ಲಿ ಹೊಟ್ಟೆಗೆ ಅಂಟಿ ಕೊಂಡಿದ್ದ ಚೊಂಬು ಕಳಚಿ ಬಿದ್ದಿತು. ಮತ್ತೆ ಮರು ಕಳಿಸಿದ ನೋವಿನ ತೀವ್ರತೆ ಇನ್ನೂ ಹೆಚ್ಚಾಯಿತು. ಹೊಟ್ಟೆಯೂ ಗಾತ್ರದಲ್ಲಿ ಊದಿಕೊಂಡಿತು. ಕುಡಿದ ನೀರೂ ಸಹ ದಕ್ಕದೆ ಎಡೆಬಿಡದೆ ವಾಂತಿಯಾಗುತ್ತಿತ್ತು. ಅವನ ಪರಿಸ್ಥಿತಿ ಹದಗೆಟ್ಟು ಬದುಕಿ ಉಳಿಯುವುದೇ

ಅನುಮಾನವೆಂಬಂತಾಯಿತು. ಅಂದಿನ ಬೆಳಗಿನ ಜಾವವೇ ಅವನನ್ನು ತೀರ್ಥಹಳ್ಳಿಯ ಆಸ್ಪತ್ರೆಗೆ ಸಾಗಿಸುವ ಏರ್ಪಾಡು ಮಾಡಿದರು.

ಆಸ್ಪತ್ರೆಗೆ ತಲುಪುವಷ್ಟರಲ್ಲೇ ತಿಮ್ಮಪ್ಪನ ಪರಿಸ್ಥಿತಿ ತುಂಬಾ ಅಪಾಯದ ಸ್ಥಿತಿಯಲ್ಲಿತ್ತು. ಅವನನ್ನು ಪರೀಕ್ಷಿಸಿದ ವೈದ್ಯರು ಹೊಟ್ಟೆಯ ಮೇಲೆಲ್ಲಾ ಎಣ್ಣೆ ಸವರಿರುವುದು ಮತ್ತು ಹೊಕ್ಕಳಸುತ್ತಾ ಕೆಂಪಗಾಗಿರುವುದರ ಬಗೆಗೆ ಕುತೂಹಲದಿಂದ ವಿಚಾರಿಸಿದರು. ಭಟ್ಟ ಕಟ್ಟಿಸಿದ ವಿಷಯವನ್ನು ಸಿದ್ದಪ್ಪಗೌಡರು ಸಂಕ್ಷಿಪ್ತವಾಗಿ ವಿವರಿಸಿದರು. ರೋಗಿಯನ್ನು ವಿವರವಾಗಿ ಪರೀಕ್ಷಿಸಿದ ವೈದ್ಯರು ಹೊಟ್ಟೆಯೊಳಗಡೆ ಕರುಳು ಒಡೆದುಕೊಂಡಿರುವ ಲಕ್ಷಣಗಳನ್ನು ಮನಗಂಡರು. ಅವನ ಪರಿಸ್ಥಿತಿಯನ್ನು ಸುಧಾರಿಸಿ ಕೊಂಡು ಆಪರೇಷನ್ ಮಾಡಿದರೆ ಬದುಕಿಸಲು ಸಾಧ್ಯವಾಗಬಹುದೆಂಬುದು ಅವರ ಅಭಿಪ್ರಾಯವಾಯಿತು.

ತಿಮ್ಮಪ್ಪನಿಗೆ ಹಲವಾರು ಗ್ಲೂಕೋಸ್ ಬಾಟಲುಗಳನ್ನು ಒಂದಾದ ಮೇಲೊಂದರಂತೆ ನೀಡಿದರು. ವಿವಿಧ ನಮೂನೆಯ ಇಂಜಕ್ಷನ್‌ಗಳನ್ನೂ ಕೊಟ್ಟರು. ಜಠರದೊಳಗಡೆ ಶೇಖರಣೆಯಾದ ಜೀರ್ಣರಸವನ್ನೆಲ್ಲಾ ಮೂಗಿನ ಮೂಲಕ ತೂರಿಸಿದ ರಬ್ಬರ್ ನಳಿಕೆಯ ಮೂಲಕ ಹೊರಗೆ ತೆಗೆದರು. ಸಾಯಂಕಾಲದ ಹೊತ್ತಿಗೆ

ಅವನ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸಿತು. ರಾತ್ರಿ ಆಪರೇಷನ್ ಮಾಡಿದರು. ಉದರ ಕೋಶದ ಒಳಗಡೆ ಆಹಾರ ಪದಾರ್ಥಗಳು, ಜೀರ್ಣರಸ, ಮತ್ತು ಕೀವು ತುಂಬಿಕೊಂಡಿದ್ದವೆಂದು ವೈದ್ಯರು ನಂತರ ತಿಳಿಸಿದರು. ಸಣ್ಣ ಮತ್ತು ದೊಡ್ಡ ಕರುಳುಗಳು ಸೇರುವ ಕಡೆ ಸಣ್ಣ ಬಾಲದಂತಿರುವ ಅಪೆಂಡಿಕ್ಸ್ ಎಂಬ ಅವಯವದ ಬುಡದಲ್ಲಿ ಒಡೆದು ತೂತಾಗಿದ್ದೇ ಆ ಪರಿಸ್ಥಿತಿಗೆ ಕಾರಣವೆಂದರು. ಅಪೆಂಡಿಕ್ಸ್‌ಗೆ ಕಾಯಿಲೆ ತಗುಲುವುದು ಅಪರೂಪವಲ್ಲವಾದರೂ ಅಷ್ಟು ಬೇಗ ಒಡೆದು ಕೊಳ್ಳಲು ಭಟ್ಟಿ-ಕಟ್ಟುವಾಗ ಬಿರುಸಿನಿಂದ ಹೊಟ್ಟೆಯನ್ನು ಉಜ್ಜಿ, ತೀಡಿದ್ದೇ ತಿಮ್ಮಪ್ಪನ ಅಪೆಂಡಿಕ್ಸ್ ಒಡೆದುಕೊಂಡಿದ್ದರ ಕಾರಣವೆಂದು ವೈದ್ಯರು ಅಭಿಪ್ರಾಯ ಪಟ್ಟರು. ಕಾಯಿಲೆ ಸಂಪೂರ್ಣವಾಗಿ ಗುಣವಾಗಿ ತಿಮ್ಮಪ್ಪ ಮನೆ ಸೇರಲು ಎರಡು ವಾರಗಳೇ ಹಿಡಿದವು.



ಇಪ್ಪತ್ತೈದು ವರ್ಷದ ಪಾರ್ವತಿ ಶಿವಮೊಗ್ಗಾ ನಗರದ ಹತ್ತಿರವಿರುವ ಗಾಡಿಕೊಪ್ಪದ ರಂಗಪ್ಪನ ಹೆಂಡತಿ ಕೇವಲ ಒಂದು ತಿಂಗಳ ಹಿಂದೆ ಪ್ರಸವವಾದ ಬಾಣಂತಿ. ಒಂದು ದಿನ ಇದ್ದಕಿದ್ದ ಹಾಗೆ ಹೊಟ್ಟೆಕಚ್ಚಿ, ನಾಲ್ಕಾರು ಸಲ ಭೇದಿಯಾಯಿತು. ಮನೆಯಲ್ಲಿ ಬೇರೆಯವರಿಗೆ

ತಂದಿದ್ದ ಭೇದಿಯ ಮಾತ್ರೆಗಳನ್ನು ಅವಳಿಗೂ ನೀಡಿದರು. ಆ ದಿನ ಭೇದಿ ಸ್ವಲ್ಪ ಕಡಿಮೆಯಾದಂತಾಯಿತು. ಮರು ದಿನ ಭೇದಿ ಮತ್ತೆ ಬಿರುಸಿನಿಂದ ಆಗತೊಡಗಿತು. ಹೊಟ್ಟೆ ಕಚ್ಚಿದಾಗಲೆಲ್ಲಾ ಹೊರಗಡೆ ಹೋಗುತ್ತಿದ್ದಳು, ಆದರೆ ಹೆಚ್ಚು ಮಲ ಬೀಳುತ್ತಿರಲಿಲ್ಲ. ಸ್ವಲ್ಪ ಸ್ವಲ್ಪ ರಕ್ತಮಿಶ್ರಿತ ಲೋಳೆ ವಸುರುತ್ತಿತ್ತು. ಬಾಣಂತಿಯ ಆರೋಗ್ಯ ವನ್ನು ವಿಚಾರಿಸಲು ಬಂದಿದ್ದ ನೆರೆ ಹೊರೆಯ ಕೆಲವು ಮಹಿಳೆಯರು ಆಕೆಗೆ ಭಟ್ಟೆ-ಜಾರಿರುವುದರಿಂದಲೇ ಆ ತರಹೆಯ ಭೇದಿಯಾಗುತ್ತಿದೆ ಅಂದರು. ಊಟ ಮಾಡು ವಾಗ ಆದ "ಕಾಲು ಧೂಳು" ಆಗಿದ್ದರ ಪರಿಣಾಮದಿಂದ "ರಂಚು" ಆಗಿರಬಹುದೆಂದು ಮತ್ತೆ ಕೆಲವರು ಅಭಿಪ್ರಾಯಪಟ್ಟರು. ಈ ಎರಡು ಪರಿಸ್ಥಿತಿಗಳಿಗೂ ಭಟ್ಟೆ ಕಟ್ಟುವುದೇ ಆ ಕಡೆ ರೂಢಿಯಲ್ಲಿರುವ "ನಾಟೀ ಚಿಕಿತ್ಸೆ"! ನೆರೆಮನೆಯ ಅಜ್ಜಿ ಯೊಬ್ಬರು ಬಂದು ಪಾರ್ವತಿಗೆ ಶಾಸ್ತ್ರೋಕ್ತವಾಗಿ ಭಟ್ಟೆ ಕಟ್ಟಿದರು. ಮೆದುವಾಗಿದ್ದ ಪಾರ್ವತಿಯ ಹೊಟ್ಟೆ ತೀಡಲು ಬಹಳ ಅನುಕೂಲಕರವಾಗಿತ್ತು. ಹೊಕ್ಕಳ ಮೇಲೆ ಹಚ್ಚಿ ಇಟ್ಟಿದ್ದ ಹಣತೆ ಎರಡು ತಾಸುಗಳವರೆಗೂ ಹಿಡಿದುಕೊಂಡೇ ಇತ್ತು. ಅದು ಕಳಚಿ ಬಿದ್ದು ಹೋದ ನಂತರ ಹೊಟ್ಟೆ ಬೇನೆ ಮತ್ತೆ ಜಾಸ್ತಿಯಾಯಿತು. ಈಗ

ವಾಂತಿಯೂ ಶುರುವಾಯಿತು; ಭೇದಿ ನಿಂತು ಹೋಯಿತು! ಸಾಯಂಕಾಲದ ಹೊತ್ತಿಗೆ ಪಾರ್ವತಿಯ ಹೊಟ್ಟೆ ಇನ್ನೂ ಹೆಚ್ಚು ಊದಿತು. ಗಳಿಗೆ ಗಳಿಗೆಗೂ ಅವಳ ಪರಿಸ್ಥಿತಿ ಹದಗೆಡುತ್ತಿರುವುದನ್ನು ನೋಡಿ ಅವಳನ್ನು ಶಿವಮೊಗ್ಗದ ಆಸ್ಪತ್ರೆಗೆ ಸಾಗಿಸ ಲಾಯಿತು.

ಪಾರ್ವತಿಯನ್ನು ಪರೀಕ್ಷಿಸಿದ ವೈದ್ಯರು ಅವಳ ಉದರ ಕೋಶದಲ್ಲಿ ಕರುಳಿನ ಸುರುಳಿಗಳು ಊದಿಕೊಂಡು ಕೀವು ತುಂಬಿಕೊಂಡಿರಬಹುದೆಂದು ಅಭಿಪ್ರಾಯಪಟ್ಟರು. ಅವಳ ಪರಿಸ್ಥಿತಿಯನ್ನು ಸುಧಾರಿಸಲು ಹಲವಾರು ಗ್ಲೂಕೋಸ್ ಬಾಟಲುಗಳು ಮತ್ತು ಒಂದು ಬಾಟಲು ರಕ್ತವನ್ನೂ ಸಹ ನೀಡಬೇಕಾಯಿತು. ಸಾಯಂಕಾಲ ಆಪರೇಷನ್ ಮಾಡಿದರು. ವೈದ್ಯರು ಮೊದಲು ಶಂಕಿಸಿ ದಂತೆ ಕರುಳಿನ ಸುರುಳಿಗಳು ಕೆಂಪಾಗಿದ್ದು, ಊದಿ ಕೊಂಡಿದ್ದವು. ಉದರಕೋಶದೊಳಗಡೆ ದುರ್ಗಂಧ ಭರಿತ ಕೀವು ತುಂಬಿಕೊಂಡಿತ್ತು. ಕೀವನ್ನೆಲ್ಲಾ ಹೊರಗೆ ತೆಗೆದು ಆಪರೇಷನ್ ಮುಗಿಸಿದರು. ಇಂತಹ ಭೀಕರ ಪರಿಸ್ಥಿತಿ ಯಿಂದ ಸುಧಾರಿಸಿಕೊಳ್ಳಲು ಪಾರ್ವತಿಗೆ ಒಂದು ತಿಂಗಳು ಬೇಕಾಯಿತು. ಆಪರೇಷನ್ ಆಗಿ ಈಗ ಮೂರು ವರ್ಷ ಗಳೇ ಆಗಿದ್ದರೂ ಸಣ್ಣ ಸಣ್ಣ ಹೊಟ್ಟೆ ನೋವಿನಿಂದ

ನರಳುವುದರಿಂದ ಪಾರ್ವತಿ ಬಿಡುಗಡೆಯಾಗಿಲ್ಲ. ಆಗಾಗ್ಗೆ ಆಸ್ಪತ್ರೆಗೆ ಹೋಗಿ ಬರುವುದೂ ತಪ್ಪಿಲ್ಲ.



ತಿಪ್ಪಯ್ಯ ಬಾಳೇಹೊನ್ನೂರಿನ ಹತ್ತಿರದ ಜೇನು ಗದ್ದೆಯ ರೈತ, ಐವತ್ತು ವರ್ಷದ ಬಡಕಲು ಶರೀರ ಅವನದು. ಎರಡು-ಮೂರು ದಿನಗಳಿಂದ ಹೊಕ್ಕಳದ ಆಜು ಬಾಜಿನಲ್ಲಿ ಹೊಟ್ಟೆಯೊಳಗಡೆ ಚಳುಕಿನಂತಹ ನೋವು ಬಂದು ಹೋಗುತ್ತಿತ್ತು. ಸುಮಾರು ಅರ್ಧ-ಮುಕ್ಕಾಲು ಗಂಟೆಗಳವರೆಗೆ ಇರುತ್ತಿದ್ದ ನೋವಿನ ಸಮಯದಲ್ಲಿ ವಾಂತಿ ಬರುವಂತಾಗುತ್ತಿತ್ತು. ಮೊದಲ ಒಂದೆರಡು ದಿನ ನಾರು ಬೇರಿನ ಕಷಾಯ ಮಾಡಿಸಿ ಕೊಂಡು ಕುಡಿದು ನೋಡಿದ. ನೋವು ಕಡಿಮೆಯಾಗ ಲಿಲ್ಲ. ಮೂರನೆಯ ದಿನ ಬಾಳೇಹೊನ್ನೂರಿಗೆ ಹೋಗಿ ವೈದ್ಯರನ್ನೂ ಕಂಡ, ಅವರು ಒಂದೆರಡು ಇಂಜಕ್ಷನ್‌ಗಳನ್ನು ನೀಡಿ, ಕೆಲವು ಮಾತ್ರೆಗಳನ್ನು ಕೊಟ್ಟರು. ಕಟ್ಟುನಿಟ್ಟಾದ ಪಥ್ಯವನ್ನೂ ಹೇಳಿದರು. ಮುಂದಿನ ಎರಡು ದಿನಗಳ ತನಕ ನೋವು ಕಡಿಮೆಯಾದಂತಾದರೂ, ಮತ್ತೆ ಮರು ಕಳಿಸಿತು. ಅವನನ್ನು ನೋಡಲು ಬರುತ್ತಿದ್ದ ನೆಂಟರಿಷ್ಟರು ಭಟ್ಟ ಜಾರಿರುವುದರಿಂದಲೇ ಅಂತಹ ನೋವು ಬರುವುದು ಅದು "ಇಂಗ್ಲಿಷ್ ಮದ್ದು" ಗಳಿಂದ ವಾಸಿಯಾಗುವುದಿಲ್ಲ

ವೆಂದು ಅಭಿಪ್ರಾಯಪಟ್ಟರು. ಆಸುಪಾಸಿನಲ್ಲಿ ಭಟ್ಟೆ ಕಟ್ಟುವುದರಲ್ಲಿ ನಿಪುಣ ನೆನಿಸಿದ ಮಡಿವಾಳ ಪುಟ್ಟಣ್ಣ ನನ್ನು ಕರೆಸಿದರು. ಪುಟ್ಟಣ್ಣನೂ ಎಲ್ಲರಂತೆ ಕ್ರಮವರಿತು ಹೊಟ್ಟೆಯ ಎಲ್ಲಾ ಕಡೆ ತೀಡಿ ಮೊದಲು ಹೊಕ್ಕಳ ಸುತ್ತ ಭಟ್ಟೆ ಕಟ್ಟಿದನು. ಒಂದು ತಾಸಿನಲ್ಲಿ ಚೊಂಬು ಬಿದ್ದು ಹೋಯಿತು. ಭಟ್ಟೆ ಕಟ್ಟಿದ ಸಮಯದಲ್ಲಿ ನೋವು ಕಡಿಮೆ ಇರುತ್ತಿದ್ದುದನ್ನು ಗಮನಿಸಿದ ಪುಟ್ಟಣ್ಣ, ತಿಪ್ಪ ಯ್ಯನ ಹೊಟ್ಟೆಯ ನಾಲ್ಕೂಕಡೆಗಳಲೆಲ್ಲಾ ತಿಕ್ಕಿ, ಮತ್ತೆ ಮತ್ತೆ ಭಟ್ಟೆಕಟ್ಟಿದ! ಭಟ್ಟೆಕಟ್ಟಿದ ಜಾಗದಲ್ಲೆಲ್ಲಾ ಸುಟ್ಟು ಬೊಬ್ಬೆಗಳಾದರೂ, ಹೊಟ್ಟೆನೋವು ಮಾತ್ರ ಕಡಿಮೆಯಾಗಲಿಲ್ಲ. ಮುಂದೆ ಎಡೆಬಿಡದೆ ವಾಂತಿಯೂ ಆಗುತ್ತಿತ್ತು. ಕುಡಿದ ನೀರೆಲ್ಲಾ ವಾಂತಿ ಆಗಿ ತಿಪ್ಪಯ್ಯನ ಬಡಕಲು ಶರೀರ ಇನ್ನೂ ಒಣಗಿದಂತಾಯಿತು. ಇನ್ನೂ ಬಿಟ್ಟರೆ ಜೀವಕ್ಕೆ ಅಪಾಯವಾಗುತ್ತದೆಂಬುದರ ಅರಿವು ಉಂಟಾದ ಬಂಧು ಬಾಂಧವರು ಅವನನ್ನು ಚಿಕ್ಕಮಗ ಳೂರಿನ ಆಸ್ಪತ್ರೆಗೆ ಸಾಗಿಸಿದರು.

ಆಸ್ಪತ್ರೆಯಲ್ಲಿ ವೈದ್ಯರು ತಿಪ್ಪಯ್ಯನ ಹೊಟ್ಟೆ ಯೊಳಗಡೆ " ಕ ರ ಳು ತ ಡೆ " ಯಾಗಿರಬಹುದೆಂದು ಅಭಿಪ್ರಾಯ ಪಟ್ಟರು. ಹೊಟ್ಟೆಯ ಚರ್ಮ ಸುಟ್ಟು ಬೊಬ್ಬೆಗಳಾಗುತ್ತಿದ್ದರೂ ಮತ್ತೆ, ಮತ್ತೆ ಭಟ್ಟೆ ಕಟ್ಟಿದ್ದು

ಅವರನ್ನು ಚಕಿತಗೊಳಿಸಿತು, ತಿಪ್ಪಯ್ಯನ ಪರಿಸ್ಥಿಯನ್ನು ಸುಧಾರಿಸಲು ಹಲವಾರು ಗ್ಲೂಕೋಸ್ ಬಾಟಲುಗಳೇ ಅಲ್ಲದೆ ಒಂದು ಬಾಟಲು ರಕ್ತವನ್ನೂ ನೀಡಿದರು. ಆ ರಾತ್ರಿ ಆಪರೇಷನ್ ಮಾಡಿದಾಗ, ಸಣ್ಣ ಕರುಳಿನ ಸರುಳಿಯು ಒಂದು ಭಾಗ, ಇನ್ನೊಂದರ ಒಳಗೆ ನುಸುಳಿ ಕೊಂಡ ಪರಿಸ್ಥಿತಿ ಉಂಟಾಗಿತ್ತು. ಆ ಭಾಗವೆಲ್ಲಾ ಕೊಳೆತು ಕಪ್ಪಗಾಗಿತ್ತು. ಉದರ ಕೋಶದೊಳಗಡೆ ಕಂದು ಬಣ್ಣದ ದ್ರವ ತುಂಬಿ ಕೊಂಡಿತ್ತು. ಕೊಳತ ಸುಮಾರು ಒಂದೂವರೆ-ಎರಡು ಅಡಿಗಳಷ್ಟು ಕರುಳನ್ನು ಕತ್ತರಿಸಿ ತೆಗೆದರು. ಅವನ ಪರಿಸ್ಥಿತಿ ಸುಧಾರಿಸಲು ಇನ್ನೂ ಒಂದು ಬಾಟಲು ರಕ್ತ ನೀಡಿದರು, ಆಪರೇಷನ್ ಮುಗಿದು ಜೀವಂತವಾಗಿ ಹೊರಗೆ ಬಂದರೂ ಮರುದಿನ ಸಾಯಂಕಾಲವೇ ತಿಪ್ಪಯ್ಯ ಅಸುನೀಗಿದ.

## ಪರಿಣಾಮಗಳು

ಹೊಟ್ಟೆಯೊಳಗಡೆ ಅಕಸ್ಮಾತ್ತಾಗಿ ಬೇನೆ ಕಾಣಿಸಿ ಕೊಂಡಾಗ ಇಲ್ಲಿವೆ ವಾಂತಿ ಭೇದಿಗಳಾದಾಗ ಹಳ್ಳಿಗಾಡು ಗಳಲ್ಲಿ ಸಾಮಾನ್ಯವಾಗಿ ಅನುಸರಿಸುವ ಚಿಕಿತ್ಸೆಗಳ ವಿಧಾನಗಳಿವು. ಹೊಟ್ಟೆಯೊಳಗಡೆಯು ನೋವಿಗೆ ಇವು ಗಳೇ ಅಲ್ಲದೆ ಇನ್ನೂ ಹಲವಾರು ಕಾರಣಗಳು ಇರಲು ಸಾಧ್ಯ, ಜಠರದಲ್ಲುಂಟಾಗುವ ಜೀರ್ಣಕ ಹುಣ್ಣು,

ಯಕೃತ್ತು, ಪಿತ್ತಕೋಶ, ಮೇದೋಜೀರಕ ಕರುಳುಗಳ ಲ್ಲಾಗುವ ಜಂತುಹುಳುಬೇನೆ ಮತ್ತಿತರ ವ್ಯತ್ಯಾಸಗಳ ಪ್ರಕಟಣೆಯಾಗುವುದೂ ನೋವಿನ ಮೂಲಕವೆ. ಮೂತ್ರಾಂಗ ಮಂಡಲದ ಅವಯುವಗಳು, ಗರ್ಭಕೋಶ ಮತ್ತು ಅದಕ್ಕೆ ಸಂಬಂಧಿಸಿದ ಅವಯುವಗಳ ಕಾಯಿಲೆ ಗಳಲ್ಲೂ ನೋವು ಪ್ರಮುಖ ಲಕ್ಷಣವಾಗಿರುತ್ತದೆ. ಈ ವ್ಯಾಧಿಗಳನ್ನು ಪತ್ತೆಮಾಡಲು ಪರಿಣಾಮಕಾರಿಯಾದ ಪರೀಕ್ಷಾ ವಿಧಾನಗಳಿವೆ; ಅವುಗಳ ನಿವಾರಣೆಗೆ ನಿರಾಪಾ ಯಕರ ಚಿಕಿತ್ಸಾ ವಿಧಾನಗಳಿವೆ. ಅವುಗಳ ಲಕ್ಷಣಗಳ ಬಗೆಗೆ ಸರಿಯಾದ ತಿಳವಳಿಕೆ ಇರದ ಭಟ್ಟಿ ಕಟ್ಟುವವರು ಹೊಟ್ಟೆಯನ್ನು ರಭಸದಿಂದ ಉಜ್ಜುವ ಕೈ ಚಳಕದಿಂದ ಉಂಟಾಗುವ ಭೀಕರ ಪರಿಣಾಮಗಳೆಷ್ಟೋ! ಹೊಟ್ಟೆ ಯೊಳಗಡೆಯ ಎಲ್ಲಾ ತರಹೆಯ ಬೇನೆಗಳಿಗೂ ದೀಪ ಹಚ್ಚಿಟ್ಟು ಭಟ್ಟಿ ಕಟ್ಟುವುದಿಲ್ಲವೆಂಬುದೂ ನಿಜ. ಸೌಮ್ಯ ರೀತಿಯ ಚಳುಕು ಇದ್ದವರು ಹೊಕ್ಕಳ ಸುತ್ತ ಎಣ್ಣೆ ಹಚ್ಚಿಕೊಂಡು, ನೋವು ಕಡಿಮೆಯಾಯಿತ್ತೆನ್ನುವುದು ಅಪರೂಪವೇನಲ್ಲ. ಬಹಳಷ್ಟು ಸಾರಿ ಮೆದುವಾಗಿ ತೀಡಿ ದಾಗ ಹೊಟ್ಟೆಯೊಳಗಡೆ ಹೆಚ್ಚಿನ ತೊಡಕುಗಳು ಉಂಟಾಗಲಾರವು. ಆದರೆ ಬಿರುಸಿನಿಂದ ತೀಡಿ ಉಜ್ಜಿ ದಾಗ ಕರುಳು ಮುಂತಾದ ಅವಯುವಗಳನ್ನು ಹೊಸಕಿ ಹಾಕಿದಂತಾಗುತ್ತದೆ. ಅವುಗಳಲ್ಲುಂಟಾಗುವ ಉರಿ

ಯೂತದ ಪರಿಣಾಮಗಳಿಂದಲೇ ಕೆಲವರು, ಹಲವಾರು ದಿನಗಳು ಆಸ್ಪತ್ರೆಗಳಲ್ಲಿ ಕಳೆಯುವುದುಂಟು. ಇಂತಹ ಕಾರ್ಯಾಚರಣೆಯ ನಂತರ ಪ್ರಕಟವಾಗುವ ಕೃತಕ ಲಕ್ಷಣಗಳು ರೋಗಿಯ ಹೊಟ್ಟೆಯಲ್ಲಿದ್ದಿರಬಹುದಾದ ನಿಜವಾದ ರೋಗದ ಚಿಹ್ನೆಗಳನ್ನು ಮುಸುಕು ಮಾಡ ಬಹುದು. ಅದರಿಂದ ರೋ ತಕ್ಕ ಚಿಕಿತ್ಸೆ ದೊರೆ ಯದೆ, ಅನಾಹುತಗಳಾದ ಪ್ರಕರಣಗಳೂ ಹೇರಳ ವಾಗಿವೆ.

ಭಿತ್ತಿ-ಕಟ್ಟುವುದರಿಂದ ಉಂಟಾಗುವ ಅಡ್ಡ ಪರಿಣಾಮಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಹೊಟ್ಟೆ ಯೊಳಗಡೆ ವಿವಿಧ ಅಂಗಾಂಗಳು ಜೋಡಣೆಯಾಗಿರುವ ರೀತಿ ಮತ್ತು ಕಾರ್ಯವಿಧಾನಗಳ ಬಗೆಗೆ ಸ್ವಲ್ಪವಾ ದರೂ ತಿಳಿದುಕೊಳ್ಳಬೇಕಾಗುತ್ತದೆ.

ಎದೆಗೂಡಿನ ಕೆಳಭಾಗದಿಂದ ಆರಂಭವಾಗಿ ಅಗಲ ವಾಗಿರುವ ಸೊಂಟದ ಎಲುಬುಗಳ ನಡುವಿನ ಆವರಣ ವನ್ನು ಉದರಕೋಶವೆನ್ನುತ್ತಾರೆ. ಈ ಪ್ರದೇಶದ ಸುತ್ತ ಬಲವಾದ ಮಾಂಸಖಂಡಗಳ ಭಿತ್ತಿ ಇದೆ. ಅದರ ಒಳ ಭಾಗವನ್ನು ಈರುಳ್ಳಿ ಸಿಪ್ಪೆಯಷ್ಟು ತೆಳು ಹಾಗೂ ನುಣು ಪಾದ ಪೊರೆ ಆವರಿಸಿಕೊಂಡಿರುತ್ತದೆ. ಈ ಪೊರೆಯೇ ಮುಂದುವರಿದು ಜಠರ, ಕರುಳು ಮುಂತಾದ ಅವಯುವ

ಗಳ ಹೊರ ಆವರಣಗಳನ್ನೂ ಬಳಸಿಕೊಂಡಿದೆ. ಹೀಗೆ ಸುತ್ತುವರಿದ ಪೊರೆ, ಅವುಗಳ ಹಿಂಭಾಗದಲ್ಲಿ ಒಂದಾಗಿ ಸೇರಿ, ಅವುಗಳನ್ನು ಬೆನ್ನಿನ ಭಿತ್ತಿಗೆ ಭದ್ರವಾಗಿ ಅಂಟು ಕೊಳ್ಳುವಂತಹ ರಚನೆಗಟ್ಟುಗಳಾಗಿ ಮಾರ್ಪಾಡಾಗಿರುತ್ತವೆ.

ಎದೆಯೊಳಗಿಂದ ಕೆಳಗಿಳಿಯುವ ಅನ್ನನಾಳವೇ ಮುಂದೆ ಜಠರವಾಗಿ ಮಾರ್ಪಾಡಾಗಿದೆ. ಬಲೂನಿನಂತೆ ಊದಿಕೊಂಡಿರುವ ಜಠರ, ಹೊರ ಪೊರೆಯಿಂದ ಸುತ್ತುವರಿದು ನೇತಾಡಿಕೊಂಡಂತಿರುತ್ತದೆ. ಸಣ್ಣ ಮತ್ತು ದೊಡ್ಡ ಕರುಳು ಅದರಿಂದಲೇ ಮುಂದುವರಿದ ಕೊಳವೆಯಾಕಾರದ ಅಂಗಗಳು. ಸುಮಾರು 800 ಸೆಂ.ಮೀ. ನಷ್ಟು ಉದ್ದದ ಈ ಅವಯವಗಳು ಉದರಕೋಶದೊಳಗಡೆ ಕಿಕ್ಕಿರಿದು ತುಂಬಿಕೊಂಡಿರುತ್ತವೆ.

ಹೊರ ಪೊರೆ ಇವುಗಳನ್ನು ಆವರಿಸಿಕೊಂಡು, ಕರುಳಿನ ಸುರುಳಿಗಳನ್ನು ಬೆನ್ನಿನ ಭಿತ್ತಿಗೆ ಅಂಟಿಸಿಕೊಂಡಿರಲು ಸಹಾಯಕವಾಗಿದೆ. ಆಹಾರ ವಸ್ತುಗಳು ಜೀರ್ಣವಾದಂತೆಲ್ಲಾ ಮುಂದೆ ಮುಂದೆ ಸಾಗಿಸಲು ಅನುಕೂಲವಾಗುವ "ತರಂಗ ಚಲನೆ"ಯ ವಿಶಿಷ್ಟ ಲಕ್ಷಣ ಅವುಗಳ ಭಿತ್ತಿಗಳಲ್ಲಿದೆ. ಕರುಳುಗಳು ಸುರುಳಿ ಸುರುಳಿಯಾಗಿ ನೇತಾಡಿಕೊಂಡಂತಿರುವುದಾದರೂ, ಅವು ಬೇರೆ

ಕಡೆ ಜಾರುವ ಅಥವಾ ಚಲಿಸುವ ಸಾಧ್ಯತೆಗಳಿಲ್ಲ. ಯಕೃತ್ತು, ತೊರಳೆ, ಮೇದೋಜೀರಕ, ಮೂತ್ರಪಿಂಡ ಗರ್ಭಕೋಶಗಳಂಥ ಅವಯುವಗಳೂ ಭದ್ರವಾದ ರಚ ಗಟ್ಟುಗಳಿಂದ ಆವರಿಸಿಕೊಂಟಿದ್ದು, ಅವು ಚಲಿಸುವ ಅವಕಾಶಗಳಿರುವುದಿಲ್ಲ. ತಾಸುಗಟ್ಟಲೆ ತಲೆ ಕೆಳಗಾಗಿ ನಿಲ್ಲುವ ಯೋಗಿಗಳಲ್ಲಾಗಲೀ, ದೇಹವನ್ನು ವಿವಿಧ ಭಂಗಿಗಳಲ್ಲಿ ತಿರುಗಿಸಿ ಅಲ್ಲಾಡಿಸುವ ಕಾರ್ಯದಲ್ಲಿ ತೊಡಗುವ ಸರ್ಕಸ್ ಮತ್ತು ದೊಂಬರಾಟದ ಪ್ರದರ್ಶನಕಾರರಲ್ಲಾಗಲೀ ಹೊಟ್ಟೆಯೊಳಗಡೆಯ ಅವ ಯುವಗಳು ಜಾರಿದ ಅಥವಾ ಚಲಿಸಿದ ನಿದರ್ಶನಗಳಿಲ್ಲ. ಉದರ ಕೋಶದ ಭಿತ್ತಿಗಳಲ್ಲಿ ಅಕಸ್ಮಾತ್ತಾಗಿ ಆಗುವ ತೂತುಗಳಲ್ಲಿ ಕರುಳಿನ ಸುರುಳಿ ತೂರಿಕೊಂಡು ಆಂಡ ವಾಯು (ಹರ್ನಿಯ) ಉಂಟಾಗಬಹುದು. ಕರುಳಿನ ಸುರುಳಿಯ ಒಂದು ಭಾಗ ತನ್ನ ಕಕ್ಷೆಯ ವಿರುದ್ಧ ತಿರುವಿಕೊಂಡೋ ಇಲ್ಲವೆ ಆದರ ಒಂದು ಭಾಗ, ಪಕ್ಕದ ಇನ್ನೊಂದರೊಳಗೆ ಷರಟಿನ ತೋಳು ಹಿಂದೆ ಸರಿಯುವ ಹಾಗೆ ನುಸುಳಿಕೊಂಡಾಗ "ಕರುಳು ತಡೆ" ಯಾಗುವ ಪರಿಸ್ಥಿತಿಗಳೂ ಇವೆ. ಇಂತಹ ವ್ಯತ್ಯಾಸಗಳನ್ನು ಹೊಟ್ಟೆ ಯನ್ನು ಉಜ್ಜಿ ಭಟ್ಟೆ-ಕಟ್ಟುವದರಿಂದ ಸರಿಪಡಿಸಲು ಸಾಧ್ಯವಾಗುವುದಿಲ್ಲ. ಹಾಗೆ ಮಾಡಿದರೆ ಅಪಾಯಗಳಾ

ಗುವುದೇ ಹೆಚ್ಚು ಎಂಬುದು ಈ ಹಿಂದೆ ವಿವರಿಸಿದ ಪ್ರಕರಣಗಳಿಂದ ಮನವರಿಕೆಯಾಗಿದೆ.

ಭಟ್ಟಿ ಕಟ್ಟುವಂತಹ ಕಾರ್ಯಾಚರಣೆಯ ಪ್ರಸ್ತಾಪ ಯಾವುದೇ ಆಧುನಿಕ ವೈದ್ಯಕೀಯ ಗ್ರಂಥಗಳಲ್ಲಿಲ್ಲ. "ಬಟ್ಟಲ ಭಟ್ಟಿ" ಕಪ್ಪಿಂಗ್ **(Cupping)** ಎಂಬ ಚಿಕಿತ್ಸಾ ವಿಧಾನದ ವಿವರಣೆ ನೂರಾರು ವರ್ಷಗಳ ಹಿಂದಿನ ಪುಸ್ತಕಗಳಲ್ಲಿರುತ್ತಿತ್ತೆಂದೇ ಕೆಲವರು ಹೇಳುತ್ತಾರೆ. ರೋಗಪೀಡಿತ ಅವಯವಕ್ಕೆ ಹೆಚ್ಚು ರಕ್ತ ಹರಿದು ಬರುವಂತೆ ಮಾಡಲು ಇಂತಹ ಕ್ರಮ ಜರುಗಿಸುತ್ತಿದ್ದರಂತೆ. ಉರಿಯುತ್ತಿರುವ ದೀಪದ ಸುತ್ತ ಪಾತ್ರೆಯೊಂದನ್ನು ಮೊಗಚಿ ಬಿಗಿಯಾಗಿ ಹಿಡಿದು ಸ್ಥಾಪನೆ ಮಾಡಿದಾಗ, ದೀಪ ಉರಿದು ನಂದಿಹೋಗುತ್ತದೆ. ಆಗ ಅಲ್ಲಿ ಶೂನ್ಯ ವಾತಾವರಣ ಉಂಟಾಗುತ್ತದೆ. ಅದರಿಂದ ಆ ಪ್ರದೇಶಕ್ಕೆ ಹೆಚ್ಚು ರಕ್ತ ಹರಿದು ಬರಬಹುದು. ಕೆಲಸಾರಿ ಗರ್ಭಸ್ರಾವವನ್ನುಂಟು ಮಾಡಲೂ ಸಹಾ ಈ ಪದ್ಧತಿಯನ್ನು ಅನುಸರಿಸುತ್ತಿದ್ದರು ಎನ್ನಲಾಗಿದೆ. ಆದರೆ "ಹೊಟ್ಟೆಯೊಳಗಡೆಯ ಯಾವುದೇ ಕಾಯಿಲೆಯನ್ನು ಸುಲಭವಾಗಿ ಗುರುತಿಸಿ ಯಶಸ್ವೀ ಚಿಕಿತ್ಸೆ ಮಾಡಲು ಅಪಾಯಕಾರಿಯಲ್ಲದ ವಿಧಾನಗಳು ಈಗ ಎಲ್ಲೆಡೆ ದೊರೆಯುತ್ತವೆ.

ಹೊಟ್ಟೆಯೊಳಗಡೆ ಇರುವ ಜಠರ, ಕರುಳುಗಳಂತಹವು ಗಾಳಿ ಮತ್ತು ಜೀರ್ಣರಸಗಳು ತುಂಬಿಕೊಂಡಿರುವ ಬಲೂನಿನಂತೆ ಊದಿಕೊಂಡಿರುತ್ತವೆ. ಒಂದು ರೀತಿಯಲ್ಲಿ ಹೂವಿನ ಎಸಳುಗಳಂತಿರುತ್ತವೆ ಎನ್ನಬಹುದು. ಯಕೃತ್ತು, ತೊರಳೆಗಳು ಮೃದುವಾದ ಅಂಗಗಳು. ಹೊಟ್ಟೆಗೆ ಎಣ್ಣೆ ಹಚ್ಚಿ ರಭಸದಿಂದ ತೀಡುವ ಕಾರ್ಯಾಚರಣೆಯಲ್ಲಿ, ಒತ್ತಡ ಬಿದ್ದ ಬಲೂನಿನಂತೆ ಅವು ಪಟ್ಟೆಂದು ಒಡೆದುಕೊಳ್ಳಬಹುದು. ಇತರ ಅವಯುವಗಳೂ ಛಿದ್ರವಾಗಬಹುದು. ಕೆಲವು ಸಾರಿ ಅವು ಒಡೆದು ಛಿದ್ರವಾಗದಿದ್ದರೂ ಹೂವಿನ ಎಸಳುಗಳನ್ನು ಹೊಸಕಿಹಾಕಿದಂತಾಗಬಹುದು. ಹೊಟ್ಟೆಯ ಚರ್ಮದ ಮೇಲೆ ಬಿಸಿಯಾದ ಹಣತೆಯನ್ನು ಇಡುವುದರಿಂದ ಸುಟ್ಟ ಬೊಬ್ಬೆಗಳಾಗುವುದುಂಟು. ಅದರಿಂದ ಹೊಟ್ಟೆಯೊಳಗಡೆಯ ಅವಯುವಗಳ ವಿನ್ಯಾಸ, ಮತ್ತು ಅವುಗಳಿಗೆ ತಗಲುವ ಕಾಯಿಲೆಗಳ ಬಗೆಗೆ ತಿಳುವಳಿಕೆ ಇಲ್ಲದವರು ಭಟ್ಟಿ ಕಟ್ಟುವಂತಹ ಕುರುಡು ಕಾರ್ಯಾಚರಣೆ ನಡೆಸುವುದು ತುಂಬಾ ಅಪಾಯಕಾರಿ ಎಂಬುದನ್ನು ಮನಗಾಣಬೇಕು. ಹೊಟ್ಟೆಯೊಳಗಡೆ ಯಾವುದೇ ಬೇನೆ ತಲೆದೋರಿದರೆ ತಕ್ಷಣ ವೈದ್ಯರ ನೆರವು ಪಡೆಯಲು ಸಾಧ್ಯವಾಗದಿದ್ದರೂ, ಇಂತಹ ಅಮಾನುಷ ಕಾರ್ಯಾಚರಣೆ ಜರುಗಿಸಿ ಕಾಯಿಲೆಯನ್ನು ಇನ್ನೂ ಹೆಚ್ಚಿನ ತೊಡಕಿಗೆ ಗುರಿಮಾಡುವುದು ಸರಿಯಲ್ಲ.

ವಾರ್ತಾಪತ್ರಿಕೆಗಳು, ಬಾನುಲಿ, ದೂರದರ್ಶನ ಮುಂತಾದ ಪ್ರಸಾರ ಮಾಧ್ಯಮಗಳ ಮೂಲಕ ಈ ಕಂದಾಚಾರದ ಆಚರಣೆಯಿಂದ ಆಗುವ ಅನಾಹುತಗಳ ಬಗೆಗೆ ಜನರಿಗೆ ಹೆಚ್ಚಿನ ಮಾಹಿತಿ ದೊರೆಯುವಂತೆ ಮಾಡಿದರೆ ಭಟ್ಟಿ ಕಟ್ಟುವಂತಹ ಹಳೇ ಕಂದಾಚಾರದ ಪದ್ಧತಿ ಮುಂದು ವರಿಯದಂತೆ ಮಾಡಲು ಸಾಧ್ಯವಾಗಬಹುದು.

— 0 —

# ನವಸಾಕ್ಷರ ಪುಸ್ತಕಮಾಲೆ

1 ಪರಿಸರ
2 ಎರೆಹುಳು (ನಿಸರ್ಗದ ರೈತ)
3 ಜಗಳದ ಬೋರಯ್ಯ
4 ಆರೋಗ್ಯವೇ ಭಾಗ್ಯ
5 ಕನ್ನಡ ಮನರಂಜನೆ
6 ಭಟ್ಟಿ ಜಾರುವುದು
7 ನಮ್ಮ ಕೇಂದ್ರ ಬ್ಯಾಂಕು
8 ಕನ್ನಡದ ಸೇನಾನಿ
9 ನಮ್ಮ ಬೇಸಾಯ
10 ಡಾ॥ಎಸ್. ರಾಧಾಕೃಷ್ಣನ್
11 ನಮ್ಮ ಸರಕಾರ
12 ರಂಗಣ್ಣನ ಕಥೆ
13 ಕಲಿಯೋಣ ಬಾ
14 ಬಾಳು ಬೆಳಗಿತು
15 ಮಬ್ಬು ಹರಿದಾಗ
16 ಮದ್ಯಪಾನ ಒಂದು ರೋಗ
17 ವಚನ ಸಾಹಿತ್ಯ
18 ಆರೋಗ್ಯ ರಕ್ಷಣೆ
19 ಹರಕೆ
20 ಒಕ್ಕಲುತನ
21 ಅಣ್ಣ-ತಮ್ಮ
22 ಮುಪ್ಪನ್ನು ಮುಂದೂಡುವುದು ಹೇಗೆ ?
23 ಜನಸೇವೆಯೇ ಜನಾರ್ದನ ಸೇವೆ
24 ಶೇರ್‌ಸಿಂಗ್
25 ವರದಕ್ಷಿಣೆ
26 ಭಾರತದ ಸ್ವಾತಂತ್ರ್ಯ ಚಳವಳಿ
27 ಸರ್ ಎಂ. ವಿಶ್ವೇಶ್ವರಯ್ಯ
28 ಸಂಜೀವಿನಿಗಳ ನಡುವೆ
29 ತಾಯ್ತನ-ಗರ್ಭಪಾತ-ಬಂಜೆತನ
30 ಭಾರತದ ಪುರುಷಸಿಂಹ

ಕನ್ನಡ ಸಾಹಿತ್ಯ ಪರಿಷತ್ತಿನ

# ಅಮೃತನಿಧಿ

"ಒಬ್ಬ ಕನ್ನಡಿಗ–ಒಂದು ರೂಪಾಯಿ !"

ಒಂದು ಕೋಟಿ ರೂಪಾಯಿಯ ಇಡುಗಂಟಿನ ಉದ್ದೇಶ
ಪರಿಷತ್ತಿನ ಆರ್ಥಿಕ ಸುಸ್ಥಿತಿಗೆ ಶಾಶ್ವತ ವ್ಯವಸ್ಥೆ

ಕನ್ನಡಿಗರೇ, ದಯವಿಟ್ಟು ಉದಾರವಾಗಿ
ನಿಮ್ಮ ಕಾಣಿಕೆ ನೀಡಿ

ನಿಮ್ಮ ಹತ್ತಿರದ
ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಖಾತೆ ೧೦೧ಕ್ಕೆ
ಕಾಣಿಕೆ ಜಮಾ ಮಾಡಿ